# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1575 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ್ ಭಂಡಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 11-03-2022. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಪಂಚಾಯತ್ ರಾಜ್ ಕಾಯಿದೆಯನುಸಾರ ಯಾವ ಯಾವ ಜಿಲ್ಲೆಯ ಜಿಲ್ಲಾಧಿಕಾರಿಗಳು ಜನವಸತಿ ಸಭಾ ಆಯೋಜಿಸಬೇಕಾದ ಪ್ರದೇಶವನ್ನು ಗುರುತಿಸಿ ಅಧಿಕೃತವಾಗಿ ಪ್ರಕಟಿಸಿದ್ದಾರೆ; ಇಲ್ಲವಾದ್ದಲ್ಲಿ ಕಾರಣವೇನು; ಗ್ರಾಮೀಣ ಪ್ರದೇಶದ ಜನರು ಶಾಸನಬದ್ಧ ಹಕ್ಕಿನಿಂದ ವಂಚಿತರಾಗುವಂತೆ ಮಾಡಿದ ಅಧಿಕಾರಿಗಳ ಮೇಲೆ ಸರ್ಕಾರದ ಕ್ರಮವೇನು; | ಇಲ್ಲ.<br><br>ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 3(2) ರಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಯು ಜನವಸತಿಯ ಪ್ರದೇಶಗಳೆಂದು ನಿರ್ದಿಷ್ಟಪಡಿಸಿ ಅಧಿಸೂಚಿಸುವ ಅಂಥ ಜನ ವಸತಿಗಳಷ್ಟು ಸಂಖ್ಯೆಯ ಜನವಸತಿ ಸಭಾಗಳು ಇರತಕ್ಕದ್ದು ಎಂದಿದೆ. ಅದರಂತೆ ಜನ ವಸತಿಯ ಪ್ರದೇಶಗಳೆಂದು ನಿರ್ದಿಷ್ಟಪಡಿಸಿ ಜನ ವಸತಿಗಳಷ್ಟು ಸಂಖ್ಯೆಯ ಜನವಸತಿ ಸಭಾಗಳು ನಡೆಯಲು ಕ್ರಮ ಕೈಗೊಳ್ಳುವಂತೆ ಈಗಾಗಲೇ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ದಿನಾಂಕ: 14-12-2016 ದಿನಾಂಕ:05-05-2021 ಮತ್ತು 09-03-2022 ರಂದು ಪತ್ರ ಬರೆಯಲಾಗಿದೆ.<br><br>ಈ ವಿಷಯವು ಆಡಳಿತಾತ್ಮಕ ನಿರ್ಧಾರವಾಗಿದ್ದು, ಜನವಸತಿಯ ಪ್ರದೇಶಗಳೆಂದು ನಿರ್ದಿಷ್ಟಪಡಿಸಲು ಪರಿಶೀಲಿಸಿ ಜಿಲ್ಲಾಧಿಕಾರಿಗಳು ಕ್ರಮ ಕೈಗೊಳ್ಳುವರು. |
| (ಆ) | ಪಂಚಾಯತ್ ರಾಜ್ ಕಾಯಿದೆಯನುಸಾರ ಯಾವ ಜಿಲ್ಲೆಗಳಲ್ಲಿ ತಾಲ್ಲೂಕುಗಳಲ್ಲಿ ಯೋಜನಾ ಸಮಿತಿಯನ್ನು ರಚಿಸಲಾಗಿರುತ್ತದೆ; ಈ ಯೋಜನಾ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳು ಯಾರು; ಕಳೆದ ಮೂರು ವರ್ಷಗಳಲ್ಲಿ ಜರುಗಿದ ಯೋಜನಾ ಸಮಿತಿ ಸಭಾ ದಿನಾಂಕಗಳು ಯಾವುವು; (ವರ್ಷವಾರು, ಜಿಲ್ಲಾವಾರು. ದಿನಾಂಕವಾರು ಮಾಹಿತಿ ನೀಡುವುದು) | ಜಿಲ್ಲಾವಾರು ಮತ್ತು ತಾಲ್ಲೂಕುವಾರು ವಿವರಗಳನ್ನು ಸಿ.ಡಿ. ಮೂಲಕ ಮಾನ್ಯ ಸದಸ್ಯರಿಗೆ ಪ್ರತ್ಯೇಕವಾಗಿ ನೀಡಲಾಗಿದೆ. |
| (ಇ) | ಪಂಚಾಯತ್‌ರಾಜ್ ಕಾಯಿದೆಯನುಸಾರ ಯಾವ ಜಿಲ್ಲೆಗಳಲ್ಲಿ ಕುಂದುಕೊರತೆ ಪ್ರಾಧಿಕಾರವನ್ನು ರಚಿಸಲಾಗಿದೆ; ಈ ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರು ಯಾರು; ಈ ಪ್ರಾಧಿಕಾರದಲ್ಲಿ ದಾಖಲಾದ ಮತ್ತು ಇತ್ಯರ್ಥಪಡಿಸಿದ ದೂರುಗಳ ಸಂಖ್ಯೆ ಎಷ್ಟು; ಪ್ರತಿ ಜಿಲ್ಲೆಯಲ್ಲಿ ಪ್ರಾಧಿಕಾರಿ ರಚನೆಯ ಕುರಿತು ಸರ್ಕಾರದ ಕ್ರಮವೇನು? | ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 233 ಗ್ರಾಪಂಅ 2021, ದಿನಾಂಕ: 26-07-2021 ರಲ್ಲಿ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 296-ಎ ರಡಿಯಲ್ಲಿ ಬೆಂಗಳೂರು ನಗರ, ಕಲಬುರಗಿ, ಬೆಳಗಾವಿ ಮತ್ತು ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗಳಲ್ಲಿ ಕುಂದು ಕೊರತೆ ನಿವಾರಣಾ ಪ್ರಾಧಿಕಾರಗಳನ್ನು ರಚಿಸಲಾಗಿದೆ.<br><br>ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯ ವಿವರ ಈ ಕೆಳಕಂಡಂತಿದೆ.- |

| ಕ್ರಸಂ. | ಜಿಲ್ಲೆ | ಹೆಸರು | ದಾಖಲಾದ ದೂರುಗಳ ಸಂಖ್ಯೆ | ಇತ್ಯರ್ಥಪಡಿಸಿದ ದೂರುಗಳ ಸಂಖ್ಯೆ |
|---|---|---|---|---|
| 1 | ಬೆಂಗಳೂರು ನಗರ | ಡಾ: ಬೂವನಹಳ್ಳಿ ನಾಗರಾಜ್, ನಿವೃತ್ತ | 7 | 1 |

| | | | | |
|---|---|---|---|---|
| | | ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ. | | |
| 2 | ಕಲಬುರಗಿ | ಡಾ: ಟಿ. ಶ್ರೀನಿವಾಸರೆಡ್ಡಿ, ನಿವೃತ್ತ ಅಪರ ನಿರ್ದೇಶಕರು, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ. | 265 | 246 |
| 3 | ಬೆಳಗಾವಿ | ಡಾ: ಕೆ.ಎನ್. ವಿಜಯಪ್ರಕಾಶ್, ನಿವೃತ್ತ ವ್ಯವಸ್ಥಾಪಕ ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ. | 36 | 18 |
| 4 | ಚಿಕ್ಕಮಗಳೂರು | ಶ್ರೀ ಕೆ. ಕರಿಯಪ್ಪ, ನಿವೃತ್ತ ಉಪಕಾರ್ಯದರ್ಶಿ, (ಆಯ್ಕೆ ಶ್ರೇಣಿ) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ. | 129 | 94 |

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 233 ಗ್ರಾಪಂಅ 2021, ದಿನಾಂಕ: 06-08-2021 ರಲ್ಲಿ ಬೆಂಗಳೂರು ನಗರ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಬೆಂಗಳೂರು ಗ್ರಾಮಾಂತರ ಮತ್ತು ತುಮಕೂರು ಜಿಲ್ಲೆಗಳು, ಚಿಕ್ಕಮಗಳೂರು ಕುಂದುಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಮೈಸೂರು ಮತ್ತು ಹಾಸನ ಜಿಲ್ಲೆಗಳು, ಬೆಳಗಾವಿ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಬಾಗಲಕೋಟೆ ಮತ್ತು ವಿಜಯಪುರ ಜಿಲ್ಲೆಗಳು ಮತ್ತು ಕಲಬುರಗಿ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಯಾದಗಿರಿ ಮತ್ತು ಬೀದರ್ ಜಿಲ್ಲೆಗಳನ್ನು ಸೇರ್ಪಡೆ ಮಾಡಲಾಗಿತ್ತು.

ಪ್ರಸ್ತುತ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 233 ಗ್ರಾಪಂಅ 2021, ದಿನಾಂಕ:31-01-2022 ರಲ್ಲಿ ಬೆಂಗಳೂರು ನಗರ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಬೆಂಗಳೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು, ಚಿಕ್ಕಮಗಳೂರು ಕುಂದುಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ಮೈಸೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು, ಬೆಳಗಾವಿ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು ಮತ್ತು ಕಲಬುರಗಿ ಕುಂದು ಕೊರತೆ ನಿವಾರಣಾ ಪ್ರಾಧಿಕಾರ ವ್ಯಾಪ್ತಿಗೆ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಸೇರ್ಪಡೆ ಮಾಡಿ ಆದೇಶ ಹೊರಡಿಸಲಾಗಿದೆ.

ಸಂ. ಗ್ರಾಅಪ 99 ಗ್ರಾಪಂಅ 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.